ಒಂದಾಣೆ ಮಾಲೆ. 97

# ಹಸ್ತರೇಖಾ ವಿಜ್ಞಾನ



ಬರೆದವರು: ಡಾ| ಕೆ. ಕೆ. ಕಲ್ಕೂರ್, ವಿಶ್ವವೈದ್ಯನಿಲಯ, ಕುರಾಡಿ, ದ. ಕ.

ಬೆಲೆ: ಆಣೆ ೧. 1956

ಒಂದಾಣೆಮಾಲೆ—ಮಂಗಳೂರು.

# ಮುನ್ನುಡಿ

ವಿಶ್ವದ ಆದಿಯಿಂದಲೂ ಯಾವುದಾದರೊಂದು ವಿಚಾರವನ್ನು ತಿಳಿಯಲು, ಒಂದು ಕ್ರಮ ಅಥವಾ ಮಾರ್ಗವನ್ನು ವ್ಯಕ್ತಿಯು ಅನುಸರಿಸುತ್ತಾ ಬಂದಿರುತ್ತಾನೆ. ಬೇರೆ ಬೇರೆ ವಿಚಾರಗಳ ಅನುಭವ ವ ಕ್ರಮಗಳನ್ನು ಕೊಡತಕ್ಕ ಅರಿವಿಕೆಗೆ ಯಾ ಜ್ಞಾನಕ್ಕೆ ಆಯಾ ವಿಷಯದ ವಿಜ್ಞಾನ ಅಥವಾ ಶಾಸ್ತ್ರವೆಂದು ಹೆಸರಿಸಿರುವರು.

ರಸಾಯನಗಳ ವಿಷಯವನ್ನು ರಸಾಯನ ಶಾಸ್ತ್ರವೂ, ಯಂತ್ರಗಳ ವಿಚಾರವನ್ನು ಯಾಂತ್ರಿಕ ವಿಜ್ಞಾನವೂ, ಖಗೋಳ ವಿಷಯಗಳನ್ನು ಖಗೋಳ ಶಾಸ್ತ್ರವೂ, ಸೂಚಿಸುವುವು. ಅಂತೆಯೇ ಅನಾದಿ ಕಾಲದಿಂದಲೂ ಲೋಕದ ಎಲ್ಲ ದೇಶಗಳಲ್ಲೂ ಮಾನವನ ಭವಿಷ್ಯತ್ತನ್ನು ತಿಳಿಯಲು ಕೆಲವು ವಿಧಾನಗಳನ್ನು ಅನುಸರಿಸುತ್ತಿರುವರು. ಅಂತಹ ಭವಿಷ್ಯತ್ ಸೂಚಕ ವಿಷಯಗಳಲ್ಲಿ ಸಾಮುದ್ರಿಕ ಶಾಸ್ತ್ರವೂ ಒಂದು. ಈ ವಿಜ್ಞಾನವು ಮನುಷ್ಯನ ಅಂಗೈ ಪರೀಕ್ಷೆಯಿಂದ ಆತನ ಮುಂದಿನ ಜೀವನಕ್ರಮವನ್ನು ತಿಳಿದುಕೊಳ್ಳಲು ಸಹಾಯಮಾಡುವುದೆಂದು ಹಲವರ ವಿಶ್ವಾಸ.

ಪಾಶ್ಚಾತ್ಯರಲ್ಲಿಯೂ ಈ ವಿಜ್ಞಾನವು ಬೆಳೆದುಬಂದಿದೆ. ಫ್ರಾನ್ಸಿನ ಶ್ರೀ। ಖೀರೋ, ಯುರೋಪಿನ ದೇಶಗಳಲ್ಲಿ ಹಸ್ತರೇಖಾ ವಿಜ್ಞಾನವನ್ನು ಪ್ರಸರಿಸಿ, ಲೋಕವಿಖ್ಯಾತನಾಗಿದ್ದಾನೆ.

ಡಾ। ಕೆ. ಕೆ. ಕೆಲ್ಕರ್, ಕುರಾಡಿ.



# ಹಸ್ತರೇಖಾ ವಿಜ್ಞಾನ

ಕೈ ಪರೀಕ್ಷಿಸುವ ಸಮಯದಲ್ಲಿ ಕರಗಳನ್ನು ನೋಡುವವರೂ ಹಾಗೂ ತೋರಿಸುವವರೂ, ಶುದ್ಧಮನಸ್ಕರಾಗಿ ಏಕಾಗ್ರತೆಯಿಂದಿರುವುದು ಅಗತ್ಯ.

## ಅಂಗೈಗಳ ವಿಧಗಳು

ಹಸ್ತಗಳನ್ನು ಏಳು ರೀತಿಯವುಗಳಾಗಿ ವಿಂಗಡಿಸಬಹುದು.

**ರಚನೆ ಮತ್ತು ಫಲ: ೧. ನಿಕೃಷ್ಟ:—** ಈ ತರದ ಹಸ್ತದ ಪರೀಕ್ಷೆಯು ಬಹಳ ಕಷ್ಟದಾಯಕವಾದುದು. ಬೆರಳುಗಳು ಗಿಡ್ಡ. ಒರಟು ಮತ್ತು ತೋರವಾಗಿ ಇರುತ್ತವೆ. ಅಂಗುಷ್ಠವು ಗಿಡ್ಡ ಮತ್ತು ಮೇಲಿನ ಭಾಗವು ಮುಂಡಾಗಿ ಇದ್ದು ಚಲನೆಗೆ ಸಡಿಲಾಗಿರುವುದಿಲ್ಲ. ಹಸ್ತಭಾಗವು ದಪ್ಪವಾಗಿ ಒರಟಾಗಿರುತ್ತದೆ. ಈ ರೀತಿಯ ಅಂಗೈ ಉಳ್ಳವರು ಜೀವನಕ್ಕಾಗಿ ಕಷ್ಟತರದ ಕೆಲಸಗಳನ್ನು ಮಾಡಬೇಕಾಗುತ್ತದೆ. ಸಿಟ್ಟಿನ ಸ್ವಭಾವದವರಾಗಿ ಸುಖಜೀವನದ ಕನಸಿನಲ್ಲೇ ಕಾಲಕಳೆಯುವರು. ಜಗಳಗಂಟರೂ ಆಗಿರುತ್ತಾರೆ. ಉಪ್ಪು ತಿಂದ ಮನೆಗೆರಡನ್ನು ಬಗೆಯಲು ಕೂಡಾ ಹಿಂಜರಿಯಲಾರರು. ಇಂಥಾ ಹಸ್ತದಲ್ಲಿ ಯಾರಿಗೆ ವಿದ್ಯಾರೇಖೆಯು ಹೃದಯರೇಖೆಯೊಡನೆ ಕೂಡಿಕೊಂಡಿದೆಯೋ ಅಂಥವನು ಖಂಡಿತವಾಗಿ ಕೊಲೆಗಡುಕನಾಗುವನು. ನಾವಿಕ ಯಾ ಸೈನಿಕನಾಗಲೂ ಬಹುದು.

೨. **ದರ್ಶನಿಕ:—** ಈ ತರದ ಹಸ್ತವಿರುವ ಜನರು ದೇಶದ ದೊಡ್ಡ ವಿದ್ವಾಂಸರೂ, ಯೋಗಿಗಳೂ ಆಗಿರುತ್ತಾರೆ. ಬೇರೆ ಮನುಷ್ಯರು ಇವರ ವಿಚಾರಶಕ್ತಿ ಹಾಗೂ ವಿಚಿತ್ರ ನಡೆವಳಿಕೆಯಿಂದ ಆಕರ್ಷಿತರಾಗುವರು. ಸ್ವಾತಂತ್ರ್ಯಪ್ರಿಯರು. ಸಿಟ್ಟಾದರೆ ಏನನ್ನೂ ಹಾಳುಮಾಡುವ ಮನೋವೃತ್ತಿಯವರು. ತರ್ಕವಿತರ್ಕಗಳಲ್ಲಿ ಇವರದ್ದೇ ಮೇಲ್ಗೈ. ಶಿಕ್ಷಿತರೂ, ಉದ್ಯೋಗಪ್ರಿಯರೂ, ಧಾರ್ಮಿಕರೂ ಆಗಿರುತ್ತಾರೆ. ಈ ಹಸ್ತವನ್ನು ಕೆಳಗಿನ ರೀತಿಯಲ್ಲಿ ಗುರುತಿಸಬಹುದು: ಅಂಗೈಯು ಸಾಧಾರಣ ವ್ಯಕ್ತಿಗಳ ಹಸ್ತಕ್ಕಿಂತ ಉದ್ದವಾಗಿ, ರೇಖೆಗಳು ಆಳವಾಗಿರುತ್ತವೆ. ಬೆರಳುಗಳ ಘಡುವೆ

ಹೆಚ್ಚು ಸ್ಥಳವಿರುವುದಿಲ್ಲ. ಬೆರಳುಗಳು ಗಂಟುಗಂಟಾಗಿ ಉದ್ದವಾಗಿ ಒಂದು ಬದಿಗೆ ಬಾಗಿ ಇರುತ್ತವೆ. ಇಂಥಾ ಹಸ್ತದ ಹೃದಯರೇಖೆಯು, ಗುರುಪರ್ವದಲ್ಲಿ ಸಮಾಪ್ತಿಗೊಂಡಿದ್ದರೆ, ಅಂಥವರು ತಮ್ಮ ಪ್ರೇಯಸಿಯನ್ನು ಕಳೆದುಕೊಂಡು, ಅದೇ ಯೋಚನೆಯಲ್ಲಿ ಜೀವವ ಕಳೆಯುವರು.

೩. **ಚತುಷ್ಕೋಣ:—** ಈ ಹಸ್ತವು ಸಾಧಾರಣ ಚೌಕಾಕೃತಿಯುದಾಗಿದ್ದು, ಬೆರಳುಗಳು ಚಿಕ್ಕದಾಗಿ ತುದಿಯು ಚೌಕವಾಗಿರುವುದು. ಈ ತರದ ಅಂಗೈ ಗುಲಾಬಿ ವರ್ಣದ್ದಾಗಿದ್ದು ಸುಂದರವಾಗಿರುತ್ತದೆ. ಈ ತರದ ಹಸ್ತದವರು ಶೂರರೂ, ಛಲವಾದಿಗಳೂ, ಧನಿಕರೂ, ಡಾಕ್ಟರರೂ ವಿಜ್ಞಾನಿಗಳೂ, ಮಂತ್ರಿಗಳೂ, ಆಗಿರುವರು. ಆತ್ಮವಿಶ್ವಾಸವುಳ್ಳವರು. ಎಲ್ಲರಲ್ಲಿಯೂ ಸಮಾನ ದೃಷ್ಟಿಯನ್ನಿಡುವವರು. ಮಿತಭಾಷಿಗಳು.

೪. **ಕಲಾವ್ಯಂಜಕ:—** ಇಂಥ ಹಸ್ತದಲ್ಲಿ ಬೆರಳುಗಳು ಉರುಟಾಗಿ ಅಂಗೈ ದಪ್ಪ, ಒರಟು, ಗಟ್ಟಿಯಾಗಿ ತುಂಬಿದ್ದಂತೆ ಕಾಣುತ್ತದೆ. ಈ ತೆರನಾದ ಹಸ್ತಕರು ಹೆಚ್ಚಾಗಿ ಕಾರ್ಯಗಳನ್ನು ಬೆರಳುಗಳಿಂದಲೇ ಮಾಡುತ್ತಾರೆ. ದೇಹಶ್ರಮ ಇವರಿಂದ ಸಾಧ್ಯವಿಲ್ಲ. ಬುದ್ಧಿವಂತಿಕೆಯಿಂದ ಉತ್ತಮ ಕೆಲಸಗಳನ್ನು ಸಾಧಿಸುವವರು. ಚಂಚಲಮನಸ್ಕರಾದರೂ, ದಯಾಮಯರು. ಸಂಗೀತ ಮತ್ತು ಸಾಹಿತ್ಯನಿಪುಣರು. ವಿಲಾಸಿಗಳು. ಇವರ ಹಸ್ತದಲ್ಲಿ ಭಾಗ್ಯರೇಖೆಯು ಯಾವ ಪ್ರಾಯಕ್ಕೆ ಅಂತ್ಯಗೊಳ್ಳುವುದೋ, ಆ ವಯಸ್ಸಿನಲ್ಲಿ ದುರ್ವ್ಯಸನದಿಂದ ಐಶ್ವರ್ಯ ನಾಶವಾಗುವುದು. ಇಂತಹ ಹಸ್ತ ಉಳ್ಳವರು ಹೆಚ್ಚಾಗಿ ಚಿತ್ರಗಾರರು, ಗಾಯಕರು, ಮುಖಂಡ, ಲೇಖಕ, ಕವಿಗಳು ಆಗಿರುವರು. ಇವರಿಗೆ ಯಾವಾಗಲೂ ಅನ್ಯರ ಸಹಾಯ ಆಗತ್ಯ.

೫. **ವ್ಯಾವಸಾಯಿಕ:—** ಈ ಹಸ್ತವು ಮಣಿಕಟ್ಟಿನ ಹತ್ತಿರ ಅಗಲವಾಗಿ, ಅಂಗೈಯ ತುದಿಯ ಭಾಗ ಸಂಕುಚಿತವಿದೆ. ಅಥವಾ ಅಂಗೈಯ ತುದಿಯ ಭಾಗವು ಅಗಲವಾಗಿ ಮಣಿಕಟ್ಟಿನ ಹತ್ತಿರ ಸಂಕೀರ್ಣವಿದೆ. ಬೆರಳುಗಳ ಮೊದಲಿನ ಗಂಟಿನ ಭಾಗವು ಅಗಲವಾಗಿ, ಮೇಲ್ಗಡೆ ಸಣ್ಣಗೆ, ಸಪೂರವಿದೆ. ಐಶ್ವರ್ಯದ ಸ್ಥಿತಿಯಲ್ಲಿ ಈ ತರದ ಹಸ್ತದವರು, ದ್ವಿತೀಯ ಶ್ರೇಣಿಯಲ್ಲಿರುವರು. ಇಂತಹ ವ್ಯಕ್ತಿಗಳು ಪ್ರಾಯಶಃ ದೊಡ್ಡ ಕಾರ್ಯಗಳನ್ನು ಕೈಗೊಳ್ಳುವರು. ಹಸನ್ಮುಖರು ಮತ್ತು ಸತ್ಯವಾದಿಗಳು. ಚಪ

ಲತೆಯನ್ನು ಸಹಿಸರು. ಇಂಜಿನಿಯರ್, ಗೌರವಾಧಿಕಾರಿಗಳೂ, ಕಂಪೆನಿಯ ಸಂಚಾಲಕರೂ, ಪೋಲೀಸ್ ಆಫೀಸರರೂ ಈ ತರದ ಅಂಗೈ ಉಳ್ಳವರಿರುತ್ತಾರೆ.

೬. ನಿಷ್ಫಲ:—ಈ ತರದ ಹಸ್ತ ಉಳ್ಳವರು ಉದ್ದವಾದ ಬೆರಳುಗಳಿದ್ದು, ಮೃದು ಮತ್ತು ನುಣುಪಾದ ಚರ್ಮದವರಾಗಿರುತ್ತಾರೆ. ಅಂಗೈಯಲ್ಲಿ ಅಧಿಕ ರೇಖೆಗಳಿರುತ್ತವೆ. ನಾಜೂಕು ಮತ್ತು ಕ್ಷಿಪ್ರ ಕಾರ್ಯ ಸಾಧಕರು. ಹಲವು ಕೆಲಸಗಳನ್ನು ಕೈಗೊಂಡು ಎಲ್ಲವನ್ನೂ ಅಷ್ಟಷ್ಟಕ್ಕೆ ಮುಗಿಸುತ್ತಾರೆ! ಮಹದಾಸೆಯುಳ್ಳವರು. ಮತ್ತು ಅದನ್ನೇ ಕಾರ್ಯರೂಪಕ್ಕೆ ತರಲು ಇಚ್ಛೆಯುಳ್ಳವರಾಗಿರುತ್ತಾರೆ. ಇವರಿಗೆ ಎಲ್ಲಿಂದಾದರೂ ಧನವು ಲಭಿಸಿದ್ದಾದರೆ ತಮ್ಮ ಜೀವನವನ್ನು ಒಳ್ಳೆ ರೀತಿಯಲ್ಲಿ ಸಾಗಿಸುವರು. ಇವರಲ್ಲಿ ಕೆಲವರು ಗಾಯಕರೂ, ಮುಖಂಡರೂ, ದಲಾಲಿಗಳೂ, ಪ್ರಚಾರಕರೂ ಆಗಿರುತ್ತಾರೆ. ತಮ್ಮನ್ನೇ ಅತಿ ಬುದ್ಧಿವಂತರೆಂದು ತಿಳಿದುಕೊಳ್ಳುತ್ತಾರೆ. ಒಂದೇ ಕಾರ್ಯದಲ್ಲಿ ನಿರತರಾಗಿರುವುದಿಲ್ಲ.

೭. ಮಿಶ್ರಿತ:—ಮೇಲೆ ಹೇಳಿದ ಯಾವುದಾದರೊಂದು ತರದ ಹಸ್ತಕ್ಕೂ ಸೇರಿಸಲಾಗದ ಹಸ್ತಗಳನ್ನು ಮಿಶ್ರಿತ ಹಸ್ತವೆನ್ನಬಹುದು. ಈ ಹಸ್ತದವರ ಸ್ವಭಾವವು ಮಿಶ್ರಣತರದ್ದಾಗಿದೆ. ಶುದ್ಧ ಹಸ್ತಗಳಲ್ಲಿರುವಷ್ಟು ಹೆಚ್ಚು ಗುಣಗಳು ಈ ಅಂಗೈಯಲ್ಲಿ ಇರುವುದಿಲ್ಲ. ಆದರೂ ಇವರು ಬಹಳ ಸುಹೃದಯಿಗಳಾಗಿರುತ್ತಾರೆ. ಮಿಶ್ರಣದ ಲೆಕ್ಕದ ಮೇಲೆ ಇವರ ಕೆಲಸಗಳಾಗುತ್ತವೆ. ಕೆಲವು ಸಾರಿ ಒಳ್ಳೇ ವ್ಯಕ್ತಿತ್ವ ತೋರಿಸುತ್ತಾರೆ. ಕೆಲವೊಮ್ಮೆ ನೀಚಕೃತ್ಯಗಳಲ್ಲೂ ಹೆಸರು ಪಡೆಯುವರು.

ನಿಕೃಷ್ಟ ಮತ್ತು ದಾರ್ಶನಿಕ: ನಿಕೃಷ್ಟ ಮತ್ತು ದಾರ್ಶನಿಕದ ಮಿಶ್ರಣವಾದರೆ ವ್ಯಕ್ತಿಯು ನಿಕೃಷ್ಟ ಮತ್ತು ದಾರ್ಶನಿಕ ವಿಚಾರಗಳ ಮಿಶ್ರಣವಾಗಿರುತ್ತಾನೆ. ಇಂತಹ ವ್ಯಕ್ತಿಗಳು ಜ್ಞಾನದ ಪ್ರಭಾವದಿಂದ ಒಳ್ಳೇ ಮಾತನಾಡುತ್ತಾರೆ. ಆದರೆ ಸ್ವಲ್ಪವೇ ಮಾತಿನ ಮೇಲೆ ಸಿಟ್ಟುಗೊಂಡು, ಒಳ್ಳೇ ಮಾತಿನ ಮೇಲೆ ನೀಚತನ ತೋರಿಸಿ ಜಗಳ ಹುಟ್ಟಿಸುತ್ತಾರೆ. ಇವರು ದಾರ್ಶನಿಕರಾಗಿರುವುದರಿಂದ ಮುಖಂಡರಾಗುತ್ತಾರೆ. ಅದರೂ ಇವರ ಅನುಕರಣೆ ಮಾಡಿದವರೊಡನೆ ಹಟಮಾರಿಯಾಗಿರುತ್ತಾರೆ. ಇವರು ಮಧುರ ಭಾಷಿಗಳು; ಆದರೆ ಕೆಲವು ಬಾರಿ ತಿರಸ್ಕಾರ ಹುಟ್ಟುವಂತೆ ಮಾತನಾಡುತ್ತ

ಲಿರುತ್ತಾರೆ. ಇವರಲ್ಲಿ ಅನೇಕರು ನಾಸ್ತಿಕರು. ಯಾರ ಮಾತನ್ನೂ ಲಕ್ಷಿಸು ವುದಿಲ್ಲ.

ನಿಕೃಷ್ಟ ಮತ್ತು ಚತುಷ್ಕೋಣ: ವಿಶಿಷ್ಟ ಮತ್ತು ಚತುಷ್ಕೋಣದ ಮಿಶ್ರಣವಾದರೆ ಇಂಥಾ ಮನುಷ್ಯನು ಸ್ವಲ್ಪ ಧನವಂತನಾಗುವನು. ವಿದ್ಯಾವಂತನಾಗುವನು. ಆದರೆ ಕಠಕರೆಯ ಮನುಷ್ಯ. ಮಾತುಮಾತಿಗೆ ಸಿಟ್ಟು ಮಾಡಿಕೊಳ್ಳುತ್ತಾನೆ.

ಕನಿಷ್ಟ ಮತ್ತು ಕಲಾವ್ಯಂಜಕ: ನಿಕೃಷ್ಟ ಮತ್ತು ಕಲಾವ್ಯಂಜಕದ ಮಿಶ್ರಣವಾದರೆ ತಲೆಯಲ್ಲಿ ನಿಪುಣನಾದರೂ ಬುದ್ಧಿಯು ಬಡ್ಡಾಗಿರುತ್ತದೆ. ತನ್ನ ವಿದ್ಯೆಯನ್ನು ಯಾರಿಗೂ ತಿಳಿಸಲಿಕ್ಕೆ ಉದ್ಯುಕ್ತನಾಗುವುದಿಲ್ಲ. ಶರೀರಪರಿಶ್ರಮದ ಕಲೆಯನ್ನು ಸಾಧಾರಣವಾಗಿ ಮಾಡುತ್ತಾರೆ. ಇದರಲ್ಲಿ ಮೆಶೀನ್ ಕೆಲಸಗಾರರು, ದರ್ಜಿಗಳು, ಸರ್ಕಸ್‌ವಾಲರು ಸೇರುತ್ತಾರೆ.

ನಿಕೃಷ್ಟ ಮತ್ತು ವ್ಯಾವಸಾಯಿಕ: ನಿಕೃಷ್ಟ ಮತ್ತು ವ್ಯಾವಸಾಯಿಕದ ಮಿಶ್ರಣವಾದರೆ ಅಂಥ ಮನುಷ್ಯರು ಸಾಧಾರಣ ವಸ್ತುವನ್ನು ಹುಡುಕುವವರು. ಇವರ ಜ್ಞಾನವು ಸಾಧಾರಣ. ಆದರೆ ಯೋಗ್ಯ ಪೋಲೀಸ್ ಆಫೀಸರ್, ಸೇನೆಯ ಸಾಧಾರಣ ಆಫೀಸರ್, ಸಣ್ಣ ಸಣ್ಣ ಕಲೆಯ ಯಜಮಾನರೂ ಆಗುತ್ತಾರೆ.

ನಿಕೃಷ್ಟ ಮತ್ತು ನಿಷ್ಫಲ: ನಿಕೃಷ್ಟ ಮತ್ತು ನಿಷ್ಫಲದ ಮಿಶ್ರಣವಾದರೆ ಅಂಥವರು ತುಚ್ಛ, ಅಸಭ್ಯ, ಸೋಮಾರಿಗಳಾಗಿರುತ್ತಾರೆ. ಬಹಳ ಚಪಲರು.

ದಾರ್ಶನಿಕ ಮತ್ತು ಚತುಷ್ಕೋಣ: ಇವುಗಳ ಮಿಶ್ರಣವಾದರೆ ಬಹಳ ಮಂಗಲಕರ. ಇಂಥಾ ಹಸ್ತವು ಕಡಿಮೆ. ಬಹಳ ಶ್ರೀಮಂತರಾದರೂ ಕಾರ್ಯತತ್ಪರರು. ಪುಸ್ತಕ ಬರೆದು ಧನಾರ್ಜನೆ ಮಾಡುತ್ತಾರೆ. ಅಲ್ಲದೆ ವಿದ್ಯೆ, ದಾರ್ಶನಿಕ ಸಿದ್ಧಾಂತ, ಮತ್ತು ವ್ಯವಸಾಯ ಕಾರ್ಯಗಳಲ್ಲಿ ನಿರತರಾಗುತ್ತಾರೆ.

ದಾರ್ಶನಿಕ ಮತ್ತು ಕಲಾವ್ಯಂಜಕ: ಇವುಗಳ ಮಿಶ್ರಣವಾದರೆ ಉಚ್ಚ ಕಲಾ ನಿಪುಣನಾದರೂ ಜಯಪ್ರದನಾಗುವುದಿಲ್ಲ. ಕಾರ್ಯತತ್ಪರನಾಗಲು ಇಚ್ಛಿಸುವುದಿಲ್ಲ. ಹಣಕ್ಕಾಗಿ ಬಸವಳಿಯುತ್ತಾನೆ. ಫಕೀರ ಯಾ ಏಕಾಂತವಾಸಿಯಾಗುತ್ತಾನೆ.

**ದಾರ್ಶನಿಕ ಮತ್ತು ವ್ಯಾವಸಾಯಕ:** ಇವುಗಳ ಮಿಶ್ರಣವಾದರೆ ಚತುರನಾಗುತ್ತಾನೆ. ತನ್ನ ಕಾರ್ಯವೆಲ್ಲಾ ಅತ್ಯುತ್ತಮವೆಂದು ನಿಶ್ಚೈಸಿ, ಅನ್ಯರಿಂದ ಟೀಕೆಗಳಾದರೆ ಸಹಿಸಲಾರನು. ಇದರಿಂದ ಕಾರ್ಯಕ್ಕೆ ಬಾಧೆ ಕೂಡಾ ಆಗಿರುತ್ತದೆ. ಇಂಥವನಿಂದ ಕಾರ್ಯ ಪಡೆಯಬೇಕಾದರೆ ಅವನನ್ನು ಆ ಕುರಿತು ಸ್ವತಂತ್ರವಾಗಿ ಬಿಡಬೇಕು.

**ದಾರ್ಶನಿಕ ಮತ್ತು ನಿಷ್ಫಲ:** ಇವುಗಳ ಮಿಶ್ರಣವಾದರೆ ಬಹಳ ಸುಧಾರಿಸಿ ಕೆಲಸ ಮಾಡುತ್ತಾರೆ. ಆದರೂ ಜಯ ಸಿಕ್ಕುವುದು ಸ್ವಲ್ಪ ಕಠಿಣ.

**ಚತುಷ್ಕೋಣ ಮತ್ತು ಕಲಾವ್ಯಂಜಕ:** ಇವುಗಳ ಮಿಶ್ರಣವಾದರೆ ಕಲಾಕಾರನಾದರೂ, ನಿಪುಣನಾಗುವುದಿಲ್ಲ. ಇಂತಹ ಮನುಷ್ಯರು ಇತರರ ಕಲೆಯಲ್ಲಿ ಆಸಕ್ತರಾಗಿ ಜೀವನವನ್ನು ಸುಖವಾಗಿ ಕಳೆಯುತ್ತಾರೆ.

**ಚತುಷ್ಕೋಣ ಮತ್ತು ವ್ಯವಸಾಯಕ:** ಇವುಗಳ ಮಿಶ್ರಣವಾದರೆ ಅತ್ಯಂತ ಕಾರ್ಯನಿರತನೂ, ನಿಪುಣನೂ ಆಗುತ್ತಾನೆ. ಆದರೆ ಯಾವುದನ್ನೂ ಸಂಪೂರ್ಣ ಮಾಡುವುದಿಲ್ಲ. ಇವರು ಸಾಧಾರಣವಾಗಿ ಇಂಜಿನಿಯರ್, ಕ್ಲಾರ್ಕ್ ಅಥವಾ ಸಣ್ಣ ಸಣ್ಣ ಕಂಪೆನಿಯ ಯಜಮಾನರೂ (ವ್ಯವಸ್ಥಾಪಕರೂ) ಆಗಿರುತ್ತಾರೆ.

**ಚತುಷ್ಕೋಣ ಮತ್ತು ನಿಷ್ಫಲ:** ಇಂತಹ ಹಸ್ತವು ನೋಡಸಿಗುವುದಿಲ್ಲ. ಇದು ಒಂದಕ್ಕೊಂದು ವಿರೋಧ ಗುಣ ಉಳ್ಳದ್ದು.

**ಕಲಾವ್ಯಂಜಕ ಮತ್ತು ನಿಷ್ಫಲ:** ಈ ಮಿಶ್ರಣವು ಒಳ್ಳೆಯದು. ಮಿಶ್ರಣವು ಬೇರೆ ಬೇರೆ ವಿಧವಾಗಿರುತ್ತದೆ. ಜಾಣ ಸಾಮುದ್ರಿಕ ಶಾಸ್ತ್ರಜ್ಞನು ಚೆನ್ನಾಗಿ ಪರಿಶೀಲಿಸಿ ಹಸ್ತದ ಯೋಗ್ಯತಾನುಸಾರ ತಾರತಮ್ಯದಿಂದ ಫಲವನ್ನು ಹೇಳಬೇಕು.

ಉಗುರು: ಉಗುರುಗಳಿಂದ ವ್ಯಕ್ತಿಯ ಆರೋಗ್ಯಾನುಭವಗಳನ್ನು ಪಡಕೊಳ್ಳಬಹುದು. ಹೆಸರಿನ ಬಣ್ಣದ ಉಗುರು ಪೂರ್ಣಾರೋಗ್ಯದ ಗುರುತು. ಬಿಳಿಬಣ್ಣದ ಉಗುರು ರಕ್ತದ ನ್ಯೂನತೆಯನ್ನು ಸೂಚಿಸುತ್ತದೆ. ಉದ್ದ ಉಗುರಿನ ಮನುಷ್ಯರಿಗೆ ಗಂಟಲು, ಎದೆ, ಶ್ವಾಸಕೋಶ ಸಂಬಂಧದ ರೋಗಗಳ ಭಯ ಇರುತ್ತದೆ. ಉಗುರು ಉದ್ದವಾಗಿ ಯಾ ಗಿಡ್ಡವಾಗಿ ಅದರಲ್ಲಿ ಧಾಕೆಗಳಿದ್ದರೆ ರೋಗದ ಭಯ. ಉದ್ದ ಉಗುರಿನ ಬಣ್ಣವು ಸ್ವಲ್ಪ ನೀಲವಾದರೆ ಸದ್ಯವೇ ರೋಗ ಪ್ರಾಪ್ತಿಯಿದೆಯೆಂದು ತಿಳಿದು ಜಾಗ್ರತೆ

ಯಿಂದಿರಬೇಕು. ಉಗುರಿನ ಮೇಲೆ ಚಂದ್ರಾಕಾರವಾಗಿ ಬೆಳ್ಳಗಾಗಿದ್ದರೆ ಹೃದಯದ ರಕ್ತದ ಅನಿಯಮಿತ ಪರಿಣಾಮವನ್ನು ತೋರಿಸುವುದು. ಉಗುರು ನೀಲಿಯಾಗಿ ಕ್ರಮೇಣ ಕಪ್ಪಾಗುತ್ತಾ ಬಂದರೆ ಮರಣಸೂಚಕ. ಕಪ್ಪಾಗಿ ದಪ್ಪವಾಗಿರುವ ಉಗುರುಳ್ಳಾತ ದರಿದ್ರನು. ಹಂಚಿನ ಬಣ್ಣದ ಹೊಳಪುಳ್ಳ ಉಗುರುಳ್ಳವನು ಉನ್ನತ ದಾರಿಯನ್ನು ತುಳಿಯುವವನು.

ಬೆರಳುಗಳು (ಹೆಬ್ಬೆಟ್ಟು ಉನ್ನತ): **ಅಂಗುಷ್ಠ**: ಮುಖ್ಯವಾದ ಬೆರಳು ಹೆಬ್ಬೆಟ್ಟು. ಇದರಿಂದ ಆ ಮನುಷ್ಯನ ಸಂಕಲ್ಪ ಶಕ್ತಿ, ಯಾ ದೃಢತೆ ತೋರುತ್ತದೆ. ಮೇಲ್ಭಾಗವು ಉಳಿದೆರಡು ಭಾಗಗಳಿಗಿಂತ ಸುಂದರವಾಗಿ ದೃಢವಾಗಿದ್ದರೆ ಮನುಷ್ಯನು ದೃಢಮನಸ್ಸುಳ್ಳವನಾಗಿರುವನು. ಇತರರ ಮಾತಿಗೆ ಬೆಲೆಕೊಡದೆ ತನ್ನ ಇಚ್ಛೆಯಂತೆಯೇ ನಡೆಯುತ್ತಾನೆ. ಸತ್ಯವಂತನೂ ನಿಪುಣನೂ ಆಗಿರುತ್ತಾನೆ. ಈ ಭಾಗದಲ್ಲಿ ಚಕ್ರವಿದ್ದರೆ ಗೃಹ ಕಾರ್ಯ, ಭೂಮಿ, ಸಂಪತ್ತು ಇತ್ಯಾದಿ ಕೆಲಸಗಳಲ್ಲಿ ನಿಪುಣನು. ಶಂಖವಿದ್ದು ಬಲಕ್ಕೆ ಬಾಗಿದ್ದರೆ ಕೆಲಸಕ್ಕೆ ಅನುಸಾರವಾಗಿ ನಡೆಯುತ್ತಾನೆ. ಎಡಕ್ಕೆ ಬಾಗಿದ್ದರೆ ಕಾರ್ಯ ನಿಷ್ಫಲ. ಈತನು ಸಂಪತ್ಶಾಲಿಯಾಗುತ್ತಾನೆ. ಉಗುರಿನ ಭಾಗದಿಂದ ಕೆಳಗಿನ ಭಾಗವು ತರ್ಕಶಕ್ತಿಯದು. ಇದು ಉದ್ದವಾಗಿ ದೃಢವಾಗಿದ್ದರೆ ತರ್ಕಶಕ್ತಿ ಹೆಚ್ಚು. ಒಣಗಿ ಎಲುಬು ತೋರುವಂತಿದ್ದರೆ ಗಿಡ್ಡವಾಗಿದ್ದರೆ ತರ್ಕಶಕ್ತಿ ಕಡಿಮೆ. ಅದಕ್ಕಿಂತ ಕೆಳಗಿನ ಅಂದರೆ ಹಸ್ತಕ್ಕೆ ಕೂಡಿಕೊಂಡಿರುವ ಭಾಗವು ಪ್ರೇಮವನ್ನು ಸೂಚಿಸುತ್ತದೆ. ಇದು ಉದ್ದವಾಗಿದ್ದರೆ ಮನುಷ್ಯನು ಪ್ರಕೃತಿಪ್ರೇಮಿಯೂ, ಸೌಂದರ್ಯ ಸಂಗೀತ ಮೊದಲಾದುವುಗಳಲ್ಲಿ ಆಸಕ್ತಿಯುಳ್ಳವನೂ ಆಗುತ್ತಾನೆ. ಕಲಾವ್ಯಂಜಕ ಹಸ್ತವಲ್ಲಿ ಈ ಭಾಗ ಅಧಿಕವಿದ್ದರೆ ಚರಿತ್ರಹೀನನು. ಸುರಾಪಾನಿಯಾಗಿ ಪತನಹೊಂದುವನು. ಇದು ಶುಕ್ರ ಗ್ರಹಕ್ಕೆ ಸಂಬಂಧಪಟ್ಟ ಬೆರಳಾದುದರಿಂದ ಶುಕ್ರ ಪರ್ವಕ್ಕೆ ಹೋಲಿಸಿ, ಸಂಪೂರ್ಣ ಲಕ್ಷಣಗಳನ್ನು ತಿಳಿದುಕೊಳ್ಳಬೇಕು.

ತರ್ಜನೀಬೆರಳು (ತೋರ್ಬೆರಳು): ಇದು ಗುರುಗ್ರಹಕ್ಕೆ ಸಂಬಂಧಿಸಿದ್ದು. ಇದರಡಿಯ ಅಂಗೈ ಭಾಗಕ್ಕೆ ಗುರುಪರ್ವವೆಂದು ಹೇಳುವರು. ಗುರುಕೃಪೆ, ದೈವಬಲ, ವಿವೇಚನಾಶಕ್ತಿ, ಚುರುಕುತನವನ್ನೂ ಈ ಬೆರಳು ತೋರಿಸುತ್ತದೆ. ಈ ಬೆರಳಿನಲ್ಲಿ ಚಕ್ರವಿದ್ದರೆ ಜಾಮೀನು ಮೂಲಕ ಧನ

ಸಂಚಯ. ಇವರು ನಂಬಿಕೆ, ಮೈತ್ರಿ ಪಡೆಯಲು ಚತುರರು. ವಕೀಲ, ಗುಮಾಸ್ತ, ವೈದ್ಯ, ಮೊದಲಾದ ಉದ್ಯೋಗದಲ್ಲಿದ್ದು, ಮುಂದಾಳುಗಳಾಗಿರುತ್ತಾರೆ. ಇವರಲ್ಲಿ ಆಕರ್ಷಕ ಗುಣಗಳಿರುತ್ತವೆ. ಶಂಖವಿದ್ದು ಎಡಕ್ಕೆ ಬಾಗಿದ್ದರೆ ಹಾನಿ. ಬಲಕ್ಕೆ ಬಾಗಿದ್ದರೆ ಕೆಲಸಕ್ಕನುಸಾರವಾಗಿ ಸುಧಾರಿಸುತ್ತಾರೆ.

ಮಧ್ಯಮ (ಶನಿ ಬೆರಳು): ಇದು ಹಸ್ತದ ಇತರ ಬೆರಳುಗಳಿಂದ ಉದ್ದ. ಇದರಲ್ಲಿ ಚಕ್ರವಿದ್ದರೆ ಲಾಭದಾಯಕ, ಕಾರ್ಯಚತುರರು. ಪುರೋಹಿತ, ವೈದ್ಯ, ಯಾ ದಾನ ಸ್ವೀಕರಿಸಿ ಜೀವಿಸುವವರಾಗಿರುತ್ತಾರೆ. ಈ ಬೆರಳು ಉದ್ದವಾಗಿ, ಬೇರೆ ಬೆರಳುಗಳು ಈ ಬೆರಳ ಕಡೆಗೆ ಬಾಗಿದ್ದರೆ ಏಕಾಂತವಾಸಿಯಾಗುವನು. ಬಹಳ ಉದ್ದವಾಗಿದ್ದರೆ ದೂಷಿತನಾಗುತ್ತಾನೆ. ಗಿಡ್ಡವಿದ್ದರೆ ಚಪಲನು. ಬೆರಳಿನ ಮೂರನೇ ಕಣ್ಣಿನಲ್ಲಿ ಗುಣಾಕಾರವಿದ್ದರೆ ಆತ್ಮಹತ್ಯೆ ಮಾಡಿಕೊಳ್ಳುವನು.

ಅನಾಮಿಕೆ (ಸೂರ್ಯಬೆರಳು): ಉಂಗುರ ಹಾಕುವ ಬೆರಳು. ಇದರಲ್ಲಿ ಚಕ್ರವಿದ್ದರೆ ಪ್ರತಿ ಕಾರ್ಯದಲ್ಲಿಯೂ ಸಫಲನಾಗುತ್ತಾನೆ. ಎಡಕ್ಕೆ ಬಾಗಿದ್ದು, ಶಂಖವಿದ್ದರೆ ದಾರಿದ್ರ್ಯ. ಯಾವ ಬೆರಳಿನಲ್ಲಿ ಪೂರ್ಣ ಚಕ್ರವಿದೆಯೋ ಆ ಬೆರಳ ಕಾರ್ಯದಲ್ಲಿ ಸಫಲತೆ. ಅನಾಮಿಕ ಯಾ ಅಂಗುಷ್ಠದಲ್ಲಿ ಪೂರ್ಣ ಚಕ್ರವಿದ್ದರೆ ಮನೆಯ ಕಾರುಭಾರದಲ್ಲಿ ಸಫಲತೆ. ಅಂಗುಷ್ಠದಲ್ಲಿ ಚಕ್ರವಿದ್ದು ತುಂಡಾದರೆ ಇನ್ನೊಬ್ಬರ ಮನೆಯ ಕಾರುಬಾರು ನಡೆಸುತ್ತಾರೆ.

ಕನಿಷ್ಠಿಕೆ (ಕಿರಿಬೆರಳು): ಈ ಬೆರಳಿನಲ್ಲಿ ಪೂರ್ಣಚಕ್ರವಿದ್ದರೆ ವ್ಯಾಪಾರದಲ್ಲಿ ಪ್ರವೀಣನು. ಬಲಬದಿಗೆ ಬಾಗಿದ ಶಂಖವಾದರೆ ಲಾಭ. ಎಡಕ್ಕೆ ಬಾಗಿದ್ದ ಶಂಖವಾದರೆ ನಷ್ಟ. ಇದು ಉದ್ದವಾಗಿ ಮೂಲವು ಇತರ ಬೆರಳುಗಳಿಗಿಂತ ಕೆಳಗಾದರೆ ಅನಾಮಿಕದ ಮೊದಲನೆಯ ಭಾಗಕ್ಕಿಂತ ಕೆಳಗಿದ್ದರೆ, ಕಾರ್ಯನಿಪುಣನು.

ಎಲ್ಲಾ ಬೆರಳುಗಳ ಸಾಮೂಹಿಕ ಫಲ: ಬೆರಳುಗಳು ಬೇರೆ ಬೆರಳುಗಳ ಕಡೆಗೆ ಕೆಲವೊಮ್ಮೆ ಬಾಗಿರುವುದುಂಟು. ಆಗ ಯಾವ ಬೆರಳ ಕಡೆ ಬಾಗಿದೆಯೋ ಆ ಬೆರಳ ಫಲವೇ ಮುಖ್ಯ. ಬೆರಳುಗಳ ಮಧ್ಯೆ ತುಂಬಾ ಎಡೆಯಿದ್ದರೆ ಖರ್ಚುಗಾರನು. ಸ್ವೇಚ್ಛೆಯಿಂದ ಕಾರ್ಯ ಮಾಡುವವನು. ಬೆರಳುಗಳನ್ನು ಒಟ್ಟಾಗಿ ಹಿಡಿದಲ್ಲಿ ಎಡೆತೋರದಿದ್ದರೆ ಧನಪ್ರಾಪ್ತಿ ಯಾ

ಮಿತವ್ಯಯಿ. ಬೆರಳುಗಳ ತಲೆ ಒಳಗಡೆ ಬಾಗಿದ್ದರೆ ಮುಖಸ್ತುತಿಗೆ ಮೆಚ್ಚುವವನು. ದುರ್ಡತೆಯುವನು.

ಗುಣಾಕಾರ ಚಿಹ್ನೆ ×: ಗುಣಾಕಾರ ಗುರುತನ್ನು ಹಸ್ತದಲ್ಲಿ ಸುಲಭವಾಗಿ ಗುರುತಿಸಬಹುದು. ಅದು ಬೇರೆ ರೇಖೆಗಳ ಕವಲುಗಳಿಂದ ಕೂಡಿದುದಾಗಿರದಿದ್ದರೆ, ಎರಡೂ ಕೈಗಳಲ್ಲಿದ್ದರೆ, ಫಲಪ್ರಾಪ್ತಿ ಖಂಡಿತ. ಇದು ಬರೇ ಗುರುಸ್ಥಾನದಲ್ಲಿದ್ದರೆ ಶುಭ. ಸಮುದ್ರಯಾತ್ರೆ ಯಾ ಧನಿಕರ ಮನೆತನದೊಂದಿಗೆ ವಿವಾಹಸಂಭವನೀಯ. ತುಂಬಾ ಗುಣಾಕಾರ ಚಿಹ್ನೆಗಳಿದ್ದರೆ ಉಚ್ಚ ಮತ್ತು ಧನಿಕಮನುಷ್ಯರೊಡನೆ ಸಂಪರ್ಕ. ಇದು ಜೀವನರೇಖೆಯ ಮೇಲಿದ್ದರೆ ಜೀವನವನ್ನು ಸಂದೇಹಮಯವಾಗಿರಿಸುವುದು. ಜ್ಞಾನರೇಖೆಯಲ್ಲಿದ್ದರೆ ಬುದ್ಧಿಕ್ಷೀಣ ಮತ್ತು ತಲೆಗೆ ಪೆಟ್ಟುಬೀಳುವ ಸಂಭವ. ಭಾಗ್ಯರೇಖೆಯಲ್ಲಿದ್ದರೆ ಹೃದಯಕ್ಕೆ ಧಕ್ಕೆ. ಶುಕ್ರ ಸ್ಥಾನದಲ್ಲಿದ್ದರೆ ದುಶ್ಶೀಲ, ಕುಲಹೀನ ನಾರೀಸಂಗದ ಸಂಭವ. ಶುಕ್ರ ಮತ್ತು ಗುರುವಿನ ಮಧ್ಯೆ ಮಂಗಲಪರ್ವದಲ್ಲಿದರ್ದೆ ಕಷ್ಟ ಮತ್ತು ಏಕಾಂತವಾಸ. ಶನಿ ಪರ್ವದಲ್ಲಿದ್ದರೆ ಆತ್ಮಹತ್ಯೆ, ಅಥವಾ ಅಪಮೃತ್ಯುವಿನ ಸೂಚನೆ. ಸೂರ್ಯಸ್ಥಾನದಲ್ಲಿದ್ದರೆ ಜಲಭಯ. ಮಾನಹಾನಿ. ಬುಧಪರ್ವದಲ್ಲಿದ್ದರೆ ವ್ಯಾಪಾರಹಾನಿ, ಕಳ್ಳರಿಂದ ಹಾನಿಯನ್ನು ತೋರಿಸುತ್ತದೆ. ಬುಧ ಮತ್ತು ಚಂದ್ರದ ಮಧ್ಯದ ಮಂಗಲಪರ್ವದಲ್ಲಿದ್ದರೆ ಲೋಕಶತ್ರುವಾಗುವ ಭಯ. ಮಣಿಬಂಧದಲ್ಲಿದ್ದರೆ ಬಾಲ್ಯದಲ್ಲಿಯೇ ಪಿತೃವಿರಹ ಅಥವಾ ಆರ್ಥಿಕಕಷ್ಟ. ಮಣಿ ಮಧ್ಯದಲ್ಲಿದ್ದರೆ ಸ್ತ್ರೀಯರನ್ನು ವಶಪಡಿಸಿ ಅವರಿಂದ ಧನಸಂಪಾದನೆ. ಗುರು ಬೆರಳಿನ ಎಲ್ಲಕ್ಕಿಂತ ಕೆಳಗಿನ ಭಾಗದಲ್ಲಿದ್ದರೆ ಅಕಸ್ಮಾತ್ ಧನಪ್ರಾಪ್ತಿ. ಜೀವನ ಮತ್ತು ಭಾಗ್ಯರೇಖೆಯ ಮಧ್ಯದಲ್ಲಿದ್ದರೆ ಪ್ರವಾಸ ದುಃಖ.

ದ್ವೀಪ (Island): ಇದೊಂದು ಅಶುಭಸೂಚಕ ಚಿಹ್ನೆ. ಎರಡೂ ಕೈಗಳಲ್ಲಿ ಜೀವನರೇಖೆಯಲ್ಲಿದ್ದರೆ, ನಿಶ್ಚಿತಮೃತ್ಯು ಭಯ. ಜ್ಞಾನರೇಖೆಯಲ್ಲಿದ್ದರೆ, ಆ ಪ್ರಾಯಕ್ಕೆ ಬುದ್ಧಿಕ್ಷೀಣ ಯಾ ಮಂಕಾಗಿರುವಿಕೆಯ ಸಂಭವ. ಶನಿಯ ಸ್ಥಾನದ ಕೆಳಗೆ ಭಾಗ್ಯರೇಖೆ ಕೂಡಿದಲ್ಲಿದ್ದರೆ, ತನ್ನ ಸಂಪಾದನೆಗಿಂತ ಹೆಚ್ಚು ಖರ್ಚು. ಸೂರ್ಯಬೆರಳಿನ ಕೆಳಗಿದ್ದರೆ ವ್ಯಾಪಾರಹಾನಿ. ಹೃದಯರೇಖೆಯ ಮೇಲೆ ಇದ್ದರೆ, ಹೃದಯ ದುರ್ಬಲ ಹಾಗೂ ಪ್ರೇಮಿಗಳಿಗೆ ಮೃತ್ಯು ಭಯ. ಸೂರ್ಯರೇಖೆಯ ಮೇಲೆ ಇದ್ದರೆ, ಮಾನಹಾನಿ. ಭಾಗ್ಯರೇಖೆಯ

ಮೇಲಿದ್ದರೆ ಧನಹಾನಿ. ಸ್ವಾಸ್ಥ್ಯರೇಖೆಯು ಮೇಲಿದ್ದರೆ ರೋಗ. ಜೀವನ ರೇಖೆಯು ಮೇಲೆ ಸ್ವಾಸ್ಥ್ಯರೇಖೆಯು ಬಳಿ ಇದ್ದರೂ ಮೃತ್ಯು. ಶುಕ್ರಸ್ಥಾನದ ಮೇಲಿದ್ದರೆ ದುಶ್ಚರಿತ ಸ್ತ್ರೀಸಂಗ. ಗುರುಸ್ಥಾನದ ಮೇಲಿದ್ದರೆ ಮಾನ ಹಾನಿ. ಬುಧಸ್ಥಾನದಲ್ಲಿದ್ದರೆ ವ್ಯಾಪಾರಹಾನಿ, ಚಂದ್ರಸ್ಥಾನದಲ್ಲಿದ್ದರೆ ಜಲಭಯ.

ತಾರೆ (Star)* : ಅಂಗುಷ್ಠದ ಎರಡನೆಯ ಭಾಗ, ಗುರು ಹಾಗೂ ಸೂರ್ಯನ ಸ್ಥಾನಗಳನ್ನು ಬಿಟ್ಟು ಉಳಿದ ಯಾವ ಭಾಗದಲ್ಲಿದ್ದರೂ ಅನಿಷ್ಟ ಪ್ರದ. ಗುರುಪರ್ವದಲ್ಲಿದ್ದರೆ ಸರ್ವಕಾರ್ಯ ಜಯ ಮತ್ತು ಕೀರ್ತಿಶಾಲಿ ಯಾಗುವನು. ಸೂರ್ಯದಲ್ಲಿದ್ದರೆ ರಾಜ, ಮಹಾಜನರ ಮಿತ್ರತ್ವದಿಂದ ಉನ್ನತ ಸ್ಥಾನಪ್ರಾಪ್ತಿ. ಅಂಗುಷ್ಠದ ೨ನೇ ಭಾಗದಲ್ಲಿದ್ದರೆ ಅಕಸ್ಮಾತ್ ಭಾಗ್ಯೋದಯ.

ಚತುಷ್ಕೋಣ ▭ ಚೌಕಾಕೃತಿ: ಯಾವ ಸ್ಥಾನದಲ್ಲಿದ್ದರೂ ಆಪತ್ತಿನಿಂದ ಪಾರುಮಾಡುತ್ತದೆ. ಧನರೇಖೆ ಯಾ ಹಸ್ತದ ಮಧ್ಯ ಇದ್ದರೆ ಸರಕಾರೀ ನೌಕರಿಯಿಂದ ಜೀವನ.

ತ್ರಿಕೋಣ △ : ಇದರ ಫಲ ಚತುಷ್ಕೋಣದಂತೆಯೇ, ಆದರೂ ಸರಕಾರೇತರ ನೌಕರಿಯಿಂದ ಜೀವನವೆಂಬುದನ್ನು ಸೂಚಿಸುತ್ತದೆ.

ಸರ್ಪ ಚಿಹ್ನೆ: ರೇಖೆಯ ಗುಣವನ್ನು ದ್ವಿಗುಣಮಾಡುತ್ತದೆ.

ಬಿಂದು: ಇದಕ್ಕೆ ಎಳ್ಳೆಂದೂ ಕರೆಯುತ್ತಾರೆ. ಇದು ಹಸ್ತದ ಯಾವ ಭಾಗದಲ್ಲಿ ಅಥವಾ ರೇಖೆಯಲ್ಲಿದೆಯೋ ಆ ಭಾಗದ ಕಾರ್ಯ ಯಾ ಫಲಕ್ಕೆ ಅನಿಷ್ಟ. ಆಯುಷ್ಯ ರೇಖೆಯಲ್ಲಿದ್ದರೆ ಅಕಸ್ಮಾತ್ ಅಪಘಾತ.

ಗೋಲಾಕಾರ ○ : ಈ ಚಿಹ್ನೆಯು ಅನಿಷ್ಟಕಾರಕ.

ಶಂಖ: ಹಸ್ತದಲ್ಲಿ ಕೇವಲ ಸೂರ್ಯಸ್ಥಾನದಲ್ಲಿದ್ದಲ್ಲಿ ಮಾನವೃದ್ಧಿ. ಅನ್ಯಸ್ಥಾನದಲ್ಲಿದ್ದರೆ ಮಾನಹಾನಿ.

ಚೈನ್: ಚೈನ್ ಆಕಾರದ ರೇಖೆಗಳಿಗೆ ಅರ್ಧ ಬಲ. ಎಂದರೆ ಆಯಾ ರೇಖೆಯ ಫಲವು ಅರ್ಧಕ್ಕರ್ಧ ಮಾತ್ರ ಲಭಿಸುವುದು. ಆರೋಗ್ಯ ರೇಖೆ ಚೈನಾಗಿದ್ದರೆ, ಆಗಾಗ ನರಳುವ ಶರೀರ ಪ್ರಕೃತಿಯುವನೆನ್ನಬೇಕು.

ಪರ್ವಸ್ಥಾನ: ಇಂಥಾ ಏಳು ಪರ್ವಗಳು ಇರುವುವು. ಏರಾದ ಪರ್ವ[illegible] ಆಯಾ ಕಾಲದ ದೆಸೆ ತೋರಿಸುವುವು. ಒಂದು ಪರ್ವವು

ಇನ್ನೊಂದರಲ್ಲಿ ಪ್ರಭಾವ ತೋರಿಸುತ್ತದೆ. ಇದರಲ್ಲಿ ಸೂರ್ಯನು ದೊಡ್ಡವನು ಮತ್ತು ಗ್ರಹಪತಿ.

ಶುಕ್ರ ಪರ್ವ: ಹೆಬ್ಬೆಟ್ಟಿನ ಕೆಳಗೆ ಮಣಿಗಂಟಿನ ಮೇಲಿರುವ ಭಾಗ. ಬೇರೆ ಪರ್ವಗಳಿಂದ ಇದು ಉಬ್ಬಿಕೊಂಡಿದ್ದರೆ ಗೆಳೆತನ, ವಿಲಾಸಾಸಕ್ತಿ, ಮತ್ತು ವ್ಯಕ್ತಿಯ ಹಟಮಾರಿತನವನ್ನು ಎತ್ತಿ ತೋರಿಸುವುದು.

ಮಂಗಳ ಪರ್ವ: ಸಣ್ಣ ಬೆರಳಿನ ಬುಡದಲ್ಲಿ, ಬುಧಸ್ಥಾನದ ಕೆಳಗೆ, ಮಣಿಗಂಟಿನ ಮೇಲಿನ ಚಂದ್ರಸ್ಥಾನದ ಮೇಲಿರುವುದು. ಹೆಬ್ಬೆಟ್ಟಿನ ಬುಡದ ಕಂಕುಳಿನ ಒಳಭಾಗದ ಹಸ್ತದಲ್ಲಿರುವುದು. ಮಂಗಳಪರ್ವವು ಎರಡು ಸ್ಥಳಗಳಲ್ಲಿರುವುದು.

ಬೃಹಸ್ಪತಿ (ಗುರು ಪರ್ವ): ತೋರ್ಬೆರಳಿನ ಅಡಿಯಲ್ಲಿರುವ ಪರ್ವ, ಗುರುಪರ್ವ. ಈ ಪರ್ವವು ಬೆಳೆದಿದ್ದರೆ ಮನುಷ್ಯನು ಯೋಚನಂತೆ ನಿಶ್ಚಿತಸಮಯದಲ್ಲಿ ಪ್ರತಿ ಒಂದನ್ನೂ ಸಾಧಿಸುವನು. ದಾಂಪತ್ಯ ಜೀವನವು ಸುಖಕರವಾಗಿರುವುದು. ವಿದ್ಯಾರ್ಜನೆಯಿಂದ ಸಮಾಜೋದ್ಧಾರಕನಾಗುವನು. ನಿರ್ಭೀತನು ಮತ್ತು ಆಶಾವಾದಿಯೂ ಆಗಿರುವನು. ಉತ್ಸಾಹಿ, ಸತ್ಯವಂತ ಎನ್ನಿಸಿಕೊಳ್ಳುವನು.

ಶನಿ ಪರ್ವ: ಇದರ ಸ್ಥಾನವು ಮಧ್ಯ ಬೆರಳಿನ ಮೂಲದಲ್ಲಿದೆ. ಇದು ಎತ್ತರವಾಗಿದ್ದರೆ ಮೋಸಗಾರ. ಜಡಬುದ್ಧಿ, ಧೂರ್ತನಾಗುತ್ತಾನೆ. ಇದು ತಗ್ಗಾಗಿದ್ದರೆ ಏಕಾಂತವಾಸಿ, ಆಲಸಿ ಹಾಗೂ ತಮೋಗುಣಿ. ಇದು ಏರಾಗಿದ್ದವರು ಮಿತಭಾಷಿಗಳು. ಧರ್ಮಾಧರ್ಮ ಮಿಶ್ರಕಾರ್ಯಾಸಕ್ತಿಯುಳ್ಳವರು.

ಸೂರ್ಯ ಪರ್ವ: ಅನಾಮಿಕ ಬೆರಳಿನ ಮೂಲದಲ್ಲಿದೆ. ಇದರ ಮಹತ್ವ ಸೂರ್ಯನಂತೆಯೇ ಇದೆ. ಹಸ್ತದಲ್ಲಿ ಸೂರ್ಯ ಪರ್ವ ಚೆನ್ನಾಗಿಲ್ಲದಿದ್ದರೆ ಜೀವನಸಂಗ್ರಾಮವು ಅಂಧಕಾರದಲ್ಲಿ ನಡೆಯುವುದು. ಇದು ಎತ್ತರದಲ್ಲಿದ್ದರೆ ಪ್ರಕಾಶಮಯ ಜೀವನ. ಗೌರವಶಾಲಿ, ಲೇಖಕ, ಕವಿಯಾಗುವನು.

ಬುಧ ಪರ್ವ: ಇದು ಕನಿಷ್ಠ ಬೆರಳಿನ ಮೂಲದಲ್ಲಿದೆ. ಎತ್ತರವಾದ ಪರ್ವವುಳ್ಳವರು ವ್ಯಾಪಾರದಲ್ಲಿ ಲಾಭ ಪಡೆಯುವರು. ವೈಜ್ಞಾನಿಕರು ಜ್ಞಾನವಂತರಾಗುತ್ತಾರೆ. ಬುಧಪರ್ವವು ಚಕ್ಕಾಗಿದ್ದರೆ ಜಿಗುಪ್ಸಿತಜೀವನ.

**ಚಂದ್ರ ಪರ್ವ:** ಬುಧದ ಕೆಳಗೆ ಮಂಗಳ, ಮಂಗಳ ಪರ್ವದ ಕೆಳಗೆ ಚಂದ್ರಸ್ಥಾನವಿದೆ. ತಗ್ಗಾಗಿದ್ದರೆ ನೀರಿನ ಭಯ ಮತ್ತು ಕಫಶರೀರಿಗಳಾಗುತ್ತಾರೆ. ಈ ಪರ್ವದಲ್ಲಿ ಚೌಕಾಕೃತಿ ಇದ್ದರೆ ವಿಮಾನಪಯಣ ಯೋಗವಿದೆ.

**ರಾಹು ಪರ್ವ:** ರಾಹುಪರ್ವವು ಹಸ್ತದ ಮಧ್ಯದಲ್ಲಿದೆ. ರಾಹು ಸ್ಥಾನವು ತಗ್ಗಾಗಿದ್ದರೆ ಧನನಾಶ. ಹೆಚ್ಚು ಎತ್ತರವಿದ್ದರೆ ಅಪವ್ಯಯ. ಸಾಧಾರಣ ಬೇರೆ ಪರ್ವಗಳನ್ನು ಕೂಡಿಸುವ ಪರ್ವತದಂತೆ ಏರು ತಗ್ಗು ಸಮತಟ್ಟಾಗಿದ್ದರೆ ಉತ್ತಮ.

**ರೇಖೆಗಳ ವರ್ಣನೆ:** ಎಡ ಹಸ್ತದ ರೇಖೆಗಳು ವ್ಯಕ್ತಿಯ ಅನುವಂಶಿಕ ಗುಣವನ್ನೂ ಬಲಕ್ಕೆ ರೇಖೆಗಳು ಸಂಸ್ಕೃತಿಯನ್ನೂ ತೋರಿಸುವುವು.

**ಆಯುಷ್ಯ ರೇಖೆ:** ಮನುಷ್ಯನ ಆಯುಷ್ಯವನ್ನು ಸೂಚಿಸುವುದೇ ಜೀವನ ರೇಖೆ. ಗುರುಸ್ಥಾನದಿಂದ ಮಣಿಬಂಧದ ವರೆಗೆ ಶುಕ್ರಪರ್ವವನ್ನು ಸುತ್ತಿಕೊಂಡು ಸಾಗುವ ರೇಖೆಯೇ ಆಯುಷ್ಯರೇಖೆ. ರೇಖೆಯು ಹರಕು ಹರಕಾಗಿ ಯಾ ಸರಪಳಿಯಂತಿದ್ದರೆ ವ್ಯಕ್ತಿಯು ಅಶಕ್ತವಾಗಿರುವನು. ನೀಳಾಗಿ ಕೊರೆದಂತಿದ್ದರೆ ದೃಢಕಾಯನಾಗಿರುವನು. ಎರಡೂ ಹಸ್ತಗಳಲ್ಲಿ ಒಂದೇ ಸ್ಥಾನದಲ್ಲಿ ಎಲ್ಲಿ ತುಂಡಾಗಿವೆಯೋ ಆ ಪ್ರಾಯಕ್ಕೆ ಮರಣ. ಕೆಲವು ಚಿಕ್ಕ ಚಿಕ್ಕ ರೇಖೆಗಳು ಶುಕ್ರಸ್ಥಾನದಿಂದ ಹೊರಟು ಜೀವನರೇಖೆಯನ್ನು ಸೇರುತ್ತವೆ. ಇವುಗಳು ಮನೆಯವರ ಕಡೆಯಿಂದ ಸಹಾಯವನ್ನು ಸೂಚಿಸುತ್ತವೆ. ಆಯುಷ್ಯ ರೇಖೆಯನ್ನು ಹೆಬ್ಬೆರಳ ಬದಿಯಿಂದ ಹೊರಡುವ ರೇಖೆಗಳು ತುಂಡುಮಾಡಿ, ಭಾಗ್ಯರೇಖೆಯನ್ನು ಸೇರಿದರೆ, ಸ್ತ್ರೀಪ್ರೇಮದಿಂದ ಭಾಗ್ಯ ವೃದ್ಧಿ. ಭಾಗ್ಯರೇಖೆಯನ್ನು ತುಂಡುಮಾಡಿದರೆ ಪ್ರೇಮದಿಂದ ಭಾಗ್ಯಕ್ಕೆ ಹಾನಿ. ಕವಲೊಡೆದು, ಈ ರೇಖೆಯಿಂದ ಸಣ್ಣ ಸಣ್ಣ ರೇಖೆಗಳು ಮೇಲ್ಮುಖವಾಗಿ ಹೋದರೆ, ಧನಲಾಭ. ಕೀರ್ತಿವೃದ್ಧಿ. ಟಿಸಿಲುಗಳು ಕೆಳಗಿಳಿದರೆ, ಅವನತಿ. ಹಸ್ತದಲ್ಲಿ ಎರಡು ಜೀವನ ರೇಖೆಗಳಿದ್ದರೆ ಅತಿ ಧನಿಕನಾಗುತ್ತಾನೆ.

**ಜ್ಞಾನ ರೇಖೆ:** ಇದೊಂದು ಹಸ್ತದ ಮುಖ್ಯರೇಖೆ. ಈ ರೇಖೆಯು ಜೀವನ ರೇಖೆಯಿಂದ ಗುರುಸ್ಥಾನದ ಮಧ್ಯೆ, ಮಂಗಳಸ್ಥಾನದಿಂದ ಅಥವಾ ಶನಿಸ್ಥಾನದಿಂದ ಆರಂಭಿಸಿ, ಹಸ್ತದ ಮಧ್ಯಭಾಗದಿಂದ ಎರಡನೆಯ ಬದಿಗೆ ಮುಂದರಿಯುತ್ತದೆ. ಇದನ್ನು ಪಿತೃರೇಖೆಯೆಂದೂ ಕರೆಯುತ್ತಾರೆ. ಇದು

ಆಯುಷ್ಯ ರೇಖೆ ಮತ್ತು ಹೃದಯರೇಖೆಯು ಮಧ್ಯದಲ್ಲಿದೆ. ಅಗಲವಾಗಿ ಒರಟಾಗಿ ಸಾಗಿದ್ದರೆ ಬುದ್ಧಿಶಕ್ತಿ ಕಡಿಮೆ. ಜ್ಞಾನರೇಖೆಯು ಡೊಂಕಾಗಿದ್ದರೆ ಮಾನಸಿಕ ಸ್ಥಿತಿಯು ಕೆಟ್ಟುಹೋಗುವುದೆಂದರ್ಥ. ಈ ರೇಖೆಯು ಬಲಕೈಯಲ್ಲಿ ನೆಟ್ಟಗಾಗಿ ಯಾ ಚಂದ್ರಸ್ಥಾನದ ಕಡೆಗೆ ಬಗ್ಗಿಹೋದರೆ ವ್ಯಕ್ತಿಯ ಇಚ್ಛೆಯು ಸಫಲಹೊಂದದು. ಇಂಥವರು ವ್ಯಾಪಾರಿಗಳಾಗಿರುತ್ತಾರೆ. ಶನಿಪರ್ವದ ಕೆಳಗಿನಿಂದ ಆರಂಭಿಸಿ ಹೃದಯ ರೇಖೆಯೊಡನೆ ಸೇರಿ ಮುಂದರಿಸಿದರೆ ಮನುಷ್ಯನು ಗೌರವಶಾಲಿಯಾಗುತ್ತಾನೆ. ಮಂಗಲಸ್ಥಾನದಿಂದ ಆರಂಭಿಸಿದರೆ ವ್ಯಕ್ತಿಯು ತನ್ನ ಮನೆಯಲ್ಲೇ ಜಗಳಮಾಡುವನು. ಈ ರೇಖೆಯ ಮೇಲೆ ದ್ವೀಪವಿದ್ದರೆ ಮಾನಸಿಕ ಚಿಂತೆ, ಅನಿಶ್ಚಿತತೆ ಮತ್ತು ಸ್ತ್ರೀಸ್ವಾಧೀನನಾಗಿರುವ ಸಂಭವವಿದೆ. [illegible] ರೇಖೆಯಿಂದ ಸಣ್ಣ ಸಣ್ಣ ರೇಖೆಗಳು ಹೊರಟು ಯಾವ ಪರ್ವದ ಕಡೆಗೆ ಹೋಗುತ್ತವೆಯೋ ಆ ಪರ್ವದ ಫಲವೇ ದೊರೆಯುತ್ತದೆ. [illegible] ರೇಖೆಯ ಒಂದು ಟಿಸಿಲು ಹೃದಯ ರೇಖೆಯನ್ನು ಸೇರಿಕೊಂಡರೆ, ವ್ಯಕ್ತಿಯು ಅತಿ ಪ್ರೇಮಿ ಯಾ ಕಾಮುಕನು. ಹೃದಯ ರೇಖೆ ಮತ್ತು [illegible] ರೇಖೆಯ ಮಧ್ಯೆ ಗುಣಾಕಾರದ ಚಿಹ್ನೆ ಇದ್ದರೆ, ಭಾಗ್ಯರೇಖೆಯು ಅಂಥಾ ಕೈಯಲ್ಲಿ ಇಲ್ಲದಿದ್ದರೆ, ಭಿಕ್ಷುಕನಾಗುವನು.

ಹೃದಯ ರೇಖೆ: ಕಿರಿಯ ಬೆರಳಿನ ಅಡಿಯ ಪರ್ವದಿಂದ, ತೋರ್ಬೆರಳಿನ ಅಡಿಯ ಗುರುಪರ್ವದ ವರೆಗೆ, ಚಾಚಿಕೊಂಡಿರುವ ರೇಖೆ. ಇದು ಸಣ್ಣದಿದ್ದರೆ ಸ್ಮರಣಶಕ್ತಿ ಕಡಮೆ. ಚಂಚಲಸ್ವಭಾವ. ಈ ರೇಖೆಯಿಲ್ಲದವನಿಗೆ ಭೂತ-ಪ್ರೇತದ ಭಯ ಯಾ ಅಕಸ್ಮಾತ್ ಮರಣದ ಸಂಭವವಿದೆ. ಸಂಕಲೆಯಂತಿದ್ದರೆ ತಲೆಶೂಲೆಯಿಂದ ನರಳುವನು. ಶನಿ ಗುರು ಪರ್ವಗಳ ಮಧ್ಯದಲ್ಲಿ ಈ ರೇಖೆಯು ಸಮಾಪ್ತಿಯಾದರೆ ತನ್ನ ಹೃದಯಪವಿತ್ರತೆಯನ್ನು ಬಹಿರಂಗಪಡಿಸುವುದಿಲ್ಲ. ಹೃದಯರೇಖೆಯು, ಶನಿಪರ್ವದ ಕೆಳಗೆ ಸಮಾಪ್ತಿಯಾದರೆ, ಪ್ರೇಮಸಂಬಂಧದಲ್ಲಿ ಸ್ವಾರ್ಥಿಯಾಗುತ್ತಾನೆ. [illegible] ರೇಖೆಯು ಪ್ರಾರಂಭದಿಂದ ಅಂತ್ಯದ ವರೆಗೆ ನೆಟ್ಟಗಾಗಿದ್ದರೆ ಪ್ರೇಮರಹಿತನಾದ ಮನುಷ್ಯ. ನಿಕೃಷ್ಟಹಸ್ತದಲ್ಲಿ ಈ ರೇಖೆಯು ನೆಟ್ಟಗಿದ್ದರೆ ಪ್ರೇಮಿಯನ್ನು ಕೊಲ್ಲುವನು ಎಂದು ತಾತ್ಪರ್ಯ. ಈ ರೇಖೆಯು ಅಂತ್ಯದಲ್ಲಿ, ಜ್ಞಾನರೇಖೆಯೊಡನೆ ಮಿಲನಗೊಂಡಿದ್ದರೆ, ಪ್ರೇಮ ವಿಷಯದಲ್ಲಿ

ಅಸಫಲನು. ಈ ರೇಖೆಯಿಂದ ಅಧೋನ್ಮುಖವಾಗಿ ಹೊರಟ ಟಿಸಿಲುಗಳು ವ್ಯಕ್ತಿಯ ಅತಿ ಕಾಮುಕತನವನ್ನು ತೋರಿಸುತ್ತದೆ.

**ಭಾಗ್ಯ ರೇಖೆ:** ಮಣಿಬಂಧದಿಂದ ಹೊರಟು ಶನಿಪರ್ವದ ವರೆಗೆ ತುಂಡಾಗದೆ ನೆಟ್ಟಗೆ ಹೋದರೆ, ಜನ್ಮದಿಂದಲೇ ಒಳ್ಳೆಯ ಕುಟುಂಬದವನೂ, ಧನಿಕನೂ, ಎನಿಸಿಕೊಳ್ಳುತ್ತಾನೆ. ಭಾಗ್ಯರೇಖೆಯು ಜ್ಞಾನರೇಖೆಯಲ್ಲಿ ಅಂತ್ಯವಾಗಿದ್ದರೆ ವ್ಯಭಿಚಾರದ ಮೂಲಕ ಭಾಗ್ಯನಷ್ಟ. ಹೃದಯರೇಖೆಯನ್ನು ಸೇರಿದ್ದರೆ ದುರ್ವ್ಯಸನದಲ್ಲಿ ಬಿದ್ದು ಧನಹಾನಿ. ಎರಡು ರೇಖೆಗಳನ್ನು ಕೂಡಿದ್ದರೂ, ಆ ರೇಖೆಗಳಿಂದ ಮುಂದೆ ಗುರುಪರ್ವದ ವರೆಗೆ ಟಿಸಿಲು ಹೋಗಿದ್ದರೆ ಮೇಲಿನ ತೊಂದರೆಗಳಿಂದ ಪಾರಾಗುವನು. ಚಂದ್ರಸ್ಥಾನದಿಂದ ಹೊರಟ ಧನರೇಖೆಯು, ಪರರ ಸಹಾಯದಿಂದ ಧನಿಕನಾಗುವನೆಂದು ಸೂಚಿಸುವುದು. [illegible] ರೇಖೆಯ ಮೇಲೆ ದ್ವೀಪವಿದ್ದರೆ ಆ ಪ್ರಾಯದಲ್ಲಿ ಧನಹಾನಿ. ಭಾಗ್ಯರೇಖೆಯ ಮೇಲೆ ತ್ರಿಕೋಣ ಯಾ ಚೌಕಾಕೃತಿ ಇದ್ದರೆ, ಮನುಷ್ಯನು ಆಪತ್ತಿನಿಂದ ಪಾರಾಗುವನು. ಶುಕ್ರಸ್ಥಾನದಿಂದ ಬೇರೆ ರೇಖೆಗಳು ಹೊರಟು ಭಾಗ್ಯರೇಖೆಯನ್ನು ತುಂಡರಿಸಿದ್ದರೆ ಆತ್ಮೀಯರಿಂದ ಭಾಗ್ಯಕ್ಕೆ ಅಡ್ಡಿ. ಎರಡೂ ಧನರೇಖೆಗಳು ಸಮೀಪದಲ್ಲಿದ್ದರೆ ಅಕಸ್ಮಾತ್ ಧನ, ಭೂಮಿ ಮತ್ತು ಗೃಹಪ್ರಾಪ್ತಿ.

**ಸೂರ್ಯರೇಖೆ:** ಸೂರ್ಯಸ್ಥಾನದಿಂದ ಹೊರಟು, ಹೃದಯರೇಖೆ ಮತ್ತು ಜ್ಞಾನರೇಖೆಗಳನ್ನು ಹಾದು, ಆಯುಷ್ಯರೇಖೆ ಯಾ ಮಣಿಬಂಧವನ್ನು ಕೂಡಿಕೊಂಡಿರುವ ರೇಖೆ. ಚಂದ್ರಸ್ಥಾನದಿಂದಲೂ ಹೊರಟು ಚಿಕ್ಕದಾಗಿಯೂ ಕಾಣಬಹುದು. ಉದ್ಯೋಗ, ವಿದ್ಯೆ, ಐಶ್ವರ್ಯ ಮತ್ತು ಆರೋಗ್ಯದಲ್ಲಿ ವ್ಯಕ್ತಿಯ ಜಯಾಪಜಯಗಳನ್ನು ಇದು ಸೂಚಿಸುತ್ತದೆ.

ಈ ವ್ಯಕ್ತಿಗೆ ಸಾಧಿಸಿದ ಕಾರ್ಯವು, ಸಿದ್ಧಿಸುವುದು ಖಂಡಿತ. ಜೀವನವು ಸುಖಮಯವಾಗಿಯೇ ಸಾಗುವುದು. ವಿಜಯರೇಖೆಯುಳ್ಳವರು ಸಾಮಾನ್ಯ ಮಟ್ಟದವರಿಗಿಂತ ಉನ್ನತ ಸ್ಥಿತಿಯಲ್ಲಿದ್ದು, ಮರ್ಯಾದೆಯಿಂದಿರುವರು. ಈ ರೇಖೆಯು ಉದಯಸ್ಥಾನದಿಂದ ಹೊರಟು ಜೀವನರೇಖೆ ಮತ್ತು ಶುಕ್ರಸ್ಥಾನದ ಕಡೆಗೆ ಹೋದರೆ ವ್ಯಕ್ತಿಯು ಪದವೀಧರನಾಗುತ್ತಾನೆ. ಭಾಗ್ಯರೇಖೆಯನ್ನು ಸೇರಿದ್ದರೆ ಭಾಗ್ಯ ಕಷ್ಟವಿಲ್ಲದೆ ಇಷ್ಟವನ್ನು ಪಡೆಯುವನು. ಭಾಗ್ಯರೇಖೆಯೂ, ಸೂರ್ಯರೇಖೆಯೂ ಮಣಿಬಂಧದಿಂದ ಹೊರಟು

ಸೂರ್ಯ ಪರ್ವದ ವರೆಗೆ ಪೂರ್ಣ ಹೋದರೆ, ಮಂತ್ರಿ ಯಾ ರಾಜನಾಗುತ್ತಾನೆ. ಸರ್ವಕಾರ್ಯಸಮರ್ಥನು. ಎರಡು ಸೂರ್ಯರೇಖೆಗಳಿದ್ದರೆ ಮನುಷ್ಯನು ಅತಿ ಆಲೋಚನಾಪರನಾಗಿ ಕಾರ್ಯವಿಲ್ಲದೆ ಕಾಲ ಕಳೆಯುವನು.

ಸ್ವಾಸ್ಥ್ಯರೇಖೆ: ಇದು ಬುಧಪರ್ವದಿಂದ ಹೊರಟು ಜೀವನರೇಖೆಯ ವರೆಗೆ ಹೋಗುತ್ತದೆ. ಇದು ಅಶುಭ ರೇಖೆ. ಈ ರೇಖೆವಿರಹಿತವ್ಯಕ್ತಿಯು ಉತ್ಸಾಹಿಯಾಗುತ್ತಾನೆ.

ವ್ಯವಸಾಯರೇಖೆ: ಸೂರ್ಯ ಯಾ ಬುಧ ಪರ್ವದಿಂದ ಹೊರಟು, ಮಣಿಬಂಧ ಯಾ ಜೀವನರೇಖೆಯ ವರೆಗೆ ಸ್ವಾಸ್ಥ್ಯರೇಖೆಗೆ ಸಮಾನಾಂತರವಾಗಿ ಹೋಗುವ ರೇಖೆ ಈ ರೇಖೆಯುಳ್ಳವನು ಸಫಲ ವ್ಯಾಪಾರಿಯು.

ವಿವಾಹ ರೇಖೆ: ಇದು ಬುಧಸ್ಥಾನದಲ್ಲಿ ಹುಟ್ಟಿ ಕಿರಿಬೆರಳ ಅಡಿ ಹೃದಯರೇಖೆಯ ಸಮಾನಾಂತರವಾಗಿ ಅಂಗೈಯ ಬದಿಯಿಂದ ಮುಂದೆ ಬರುತ್ತದೆ. ಎಷ್ಟು ರೇಖೆಗಳಿರುತ್ತವೆಯೋ ಅಷ್ಟು ಲಗ್ನ ಯಾ ಪ್ರೇಮ ಚಿಂತನೆಗಳೆಂತ ತಿಳಿಯಬೇಕು. ಸಣ್ಣ ಸಣ್ಣ ರೇಖೆಗಳು ಅಸಫಲ ಪ್ರೇಮವನ್ನೂ ದೊಡ್ಡ ರೇಖೆಯು ಲಗ್ನವನ್ನೂ ಸೂಚಿಸುತ್ತದೆ. ಈ ರೇಖೆಯು ಹೃದಯ ರೇಖೆಯ ಕಡೆಗೆ ಬಾಗಿದ್ದರೆ ವಿವಾಹಜೀವನವು ಸುಖಪ್ರದವಾಗಿರುವುದಿಲ್ಲ. ಈ ರೇಖೆಯು ಬೆರಳ ಕಡೆಗೆ ಬಾಗಿದ್ದರೆ ಸದಾ ಅವಿವಾಹಿತನು. ಇದಲ್ಲದೆ ಶುಕ್ರಸ್ಥಾನದಲ್ಲಿ ಜೀವನರೇಖೆಯ ಸಮಾನಾಂತರ ರೇಖೆಗಳಿದ್ದರೆ ವಿವಾಹರೇಖೆಯೆಂತಲೂ ತಿಳಿಯಬೇಕು. ಇಂತಹ ಸಮಾನಾಂತರ ರೇಖೆಗಳು ವ್ಯಕ್ತಿಯ ಕೈಯಲ್ಲಿ ಎರಡಿದ್ದರೆ ಸಹಧರ್ಮಿಣಿ ಮತ್ತು ಉಪಧರ್ಮಿಣಿ ಎಂಬುದನ್ನು ಸೂಚಿಸುತ್ತದೆ.

ಸಂತಾನ ರೇಖೆ: ಕೆಲವು ಸಣ್ಣ ರೇಖೆಗಳು ವಿವಾಹ ರೇಖೆಯಿಂದ ಹೊರಟು ಕನಿಷ್ಠಿಕ ಬೆರಳಕಡೆ ಹೋಗುತ್ತವೆ. ಇದು ಸಂತಾನಸೂಚಕ. ಸಂತಾನಸಂಖ್ಯೆ ನೋಡುವುದಕ್ಕೆ, ಸ್ತ್ರೀ ಪುರುಷರೀರ್ವರ ಹಸ್ತಗಳನ್ನು ನೋಡುವುದು ಅಗತ್ಯ.

ಶುಕ್ರಮುದ್ರಿಕಾ: ಅರ್ಧಚಂದ್ರಾಕೃತಿಯಾಗಿ ತೋರ್ಬೆರಳು ಮತ್ತು ನಡುಬೆರಳುಗಳಿಂದ ಹೊರಟು, ಶನಿ ಮತ್ತು ಸೂರ್ಯ ಪರ್ವಗಳನ್ನು ಆವರಿಸಿ, ಕನಿಷ್ಠಿಕ ಯಾ ನಡುಬೆಟ್ಟಿನಲ್ಲಿ ಅಂತ್ಯವಾಗುವ ರೇಖೆ. ಈ

ರೇಖೆಯುಳ್ಳವರು ಲೇಖಕರು, ಅಧ್ಯಯನಾಸಕ್ತರು. ಇದು ತುಂಡು ತುಂಡಾಗಿದ್ದರೆ ಯಾ ಕುಳ್ಳಾಗಿದ್ದರೆ ಅಧಿಕಕಾಮಾಸಕ್ತಿಯುಳ್ಳವರು.

**ಗುರುಮುದ್ರಿಕಾ:** ಈ ರೇಖೆಯು ಗುರುಪರ್ವವನ್ನು ಸುತ್ತುಗಟ್ಟಿ ಶನಿಪರ್ವದ ವರೆಗೆ ಅರ್ಧಚಂದ್ರಾಕೃತಿಯಲ್ಲಿ ಮುಂದರಿಯುವುದು. ಈ ಮುದ್ರಿಕೆಯಿರುವವನು ಜ್ಯೋತಿಷ್ಯ, ಸಾಮುದ್ರಿಕ ಹಾಗು ಲಕ್ಷಣಪಟುವು. ವ್ಯಕ್ತಿಯನ್ನು ತಿಳಿದೊಡನೇ ಅರಿತುಕೊಳ್ಳುವನು. ಇವರಿಗೆ ನಿಜಸ್ವಪ್ನಗಳು ಬರುತ್ತವೆ.

**ಶನಿಮುದ್ರಿಕಾ:** ಇದು ತರ್ಜನಿ ಮತ್ತು ಮಧ್ಯಮ ಬೆರಳಿನ ಮಧ್ಯದಿಂದ ಹೊರಟು ಶನಿಪರ್ವವನ್ನು ಬಳಸಿ ಅನಾಮಿಕದ ಮಧ್ಯವನ್ನು ತಲುಪುತ್ತದೆ. ಇದು ನಿಕೃಷ್ಟಭಾಗ್ಯದ ಚಿಹ್ನೆ. ಇವನು ಏಕಾಂತಪ್ರಿಯನು.

**ಧನುರೇಖೆ:** ಧನುಸ್ಸಿನಂಥಾ ರೇಖೆಯು ಚಂದ್ರಸ್ಥಾನದಲ್ಲಿ ಕಾಣಸಿಗುವುದು. ಇದರ ತಲೆಯು ಬೆರಳ ಕಡೆಗೆ ಇದ್ದರೆ, ಯಾ ಜೀವನರೇಖೆಯನ್ನು ತುಂಡರಿಸಿದರೆ ವ್ಯಕ್ತಿಯು ಲಂಪಟನು ಯಾ ಧೂರ್ತನು.

**ವೈರಿರೇಖೆ:** ಮಂಗಳಪರ್ವಗಳೆರಡರಲ್ಲಿಯೂ ಇರತಕ್ಕ ಚಿಕ್ಕ ಚಿಕ್ಕ ರೇಖೆಗಳಿಗೆ ವಿರೋಧ ರೇಖೆಗಳೆಂದು ಹೆಸರು. ಮಂಗಳಪರ್ವದಿಂದ ಹೊರಟು ಜೀವನರೇಖೆಯನ್ನು ತುಂಡರಿಸಿದರೆ ವ್ಯಕ್ತಿಯು ಗೃಹತಾಪತ್ರಯದಿಂದ (ವೈರಿ) ಕಂಗಾಲಾಗುವನು.

**ಯಾತ್ರಾ ರೇಖೆಗಳು:** ಮಣಿಬಂಧದಿಂದ ಹೊರಟು ಚಂದ್ರಸ್ಥಾನಕ್ಕೆ ಮೇಲ್ಮುಖವಾಗಿ ಹೋಗುವ ರೇಖೆಗಳು. ಜೀವನರೇಖೆಯಿಂದ ಚಂದ್ರಸ್ಥಾನಕ್ಕೆ ಹೋಗುವ ಚಿಕ್ಕ ರೇಖೆಗಳೂ ಯಾತ್ರಾ ರೇಖೆಗಳೇ. ಯಾತ್ರಾರೇಖೆಯು ಭಾಗ್ಯರೇಖೆಯನ್ನು ಕೂಡಿದರೆ ವಿವಾಹವು ಯಾತ್ರಾಸ್ಥಳದಲ್ಲಾಗುವುದು.

**ಮಣಿಬಂಧ:** ಮಣಿಬಂಧದಲ್ಲಿ ಸಂಕಲೆಯ ರೂಪದಲ್ಲಿ ಇರುವ ರೇಖೆಗಳು. ಎರಡು ಯಾ ಮೂರು ರೇಖೆಗಳಿರುತ್ತವೆ. ಇವು ಸರಪಳಿಯಾಗಿರದೆ ಸೀದಾವಾಗಿದ್ದರೆ ಸುಖಪ್ರದ. ಎರಡಿದ್ದರೆ ಧನಾಸಕ್ತಿಯಿಂದ ಸುಖ. ಮೂರಿದ್ದರೆ ಗೃಹವಾಸದಿಂದ ಸುಖ.

**ರಾಶಿಸ್ಥಾನ:** ಜ್ಯೋತಿಷ್ಯದಲ್ಲಿ ಹೇಗೆ ಹನ್ನೆರಡು ಗ್ರಹಸ್ಥಾನಗಳಿವೆಯೋ ಹಾಗೆಯೇ ನಾಲ್ಕು ಬೆರಳುಗಳಲ್ಲಿಯೂ ದ್ವಾದಶ ಗ್ರಹಸ್ಥಾನಗಳಿವೆ.

ಇವುಗಳ ಸವಿಸ್ತಾರ ವಿಚಾರವನ್ನು ಗ್ರಂಥಕರ್ತನ ಈ ವಿಚಾರದ ದೊಡ್ಡ ಪುಸ್ತಕದಿಂದ ತಿಳಿದುಕೊಳ್ಳಿರಿ.

**ಘಟನಾ ಕಾಲ:** ಹಸ್ತರೇಖೆ, ಪರ್ವ ಮತ್ತು ಚಿಹ್ನೆಗಳಿಂದ ಕಾಲ ನಿಯಮವನ್ನು ಕಷ್ಟದಿಂದ ತಿಳಿಯಲು ಹೆಚ್ಚಿನ ಕಲಿಯುವಿಕೆಯು ಅಗತ್ಯ. ಇಂತಹ ಅಭ್ಯಾಸ ಪಠನಕ್ಕೆ ಅಧಿಕ ವಿಷಯಗಳುಳ್ಳ "ಸಾಮುದ್ರಿಕಾ ಮತ್ತು ಇತರ ಶಾಸ್ತ್ರಗಳು" ಎಂಬ ಪುಸ್ತಕವನ್ನು ಪಠಿಸಿರಿ.

**ಸಮಾಪ್ತಿ ಸೂಚನೆಗಳು:** ಹಸ್ತವನ್ನು ಸರಿಯಾದ ರೀತಿಯಲ್ಲಿ ನೋಡಲು ಅಂಗೈಗೆ ಶಾಯಿ ಹಚ್ಚಿ, ಕಾಗದವನ್ನು ಅದರ ಮೇಲೆ ಇಟ್ಟು ಮೃದುವಾದ ದಿಂಬನ್ನು ಕಾಗದದ ಮೇಲೆ ಇಟ್ಟು ಒತ್ತಲು ಮುದ್ರೆಯು ಸರಿಯಾಗಿ ಬರುವುದು. ಹೀಗೆ ಎರಡೂ ಹಸ್ತಗಳ ಅಚ್ಚನ್ನು ತೆಗೆದು, ರೇಖೆಗಳನ್ನು ಹೋಲಿಸಿ ಫಲಾಫಲಗಳನ್ನು ಸೂಚಿಸಬೇಕು. ಕಾಲಗತಿಯಿಂದ, ವಾತಾವರಣ ಮತ್ತು ವ್ಯಕ್ತಿಯ ಜೀವನಕ್ರಮ ವ್ಯತ್ಯಾಸದಿಂದ, ಮನಸ್ಸಿನ ನಿಕಟ ಚಿಂತೆಯಿಂದ, ರೇಖೆಗಳು ದೃಢವಾಗುವುದನ್ನೂ, ಅಸ್ತವ್ಯಸ್ತವಾಗುವುದನ್ನೂ ಕೂಡಿ ಕಡಿಯುವುದನ್ನೂ, ದೃಶ್ಯಾದೃಶ್ಯವಾಗುವುದನ್ನೂ ಕಾಣಬಹುದು.

(ಈ ಚಿಕ್ಕಹೊತ್ತಿಗೆಯಲ್ಲಿ, ಹಸ್ತರೇಖಾ ವಿಜ್ಞಾನದ ಸಂಕ್ಷಿಪ್ತ ವಿವರವನ್ನು ಮಾತ್ರ ಕೊಡಲಾಗಿದೆ. ಈ ಲೇಖಕರ "ಸಾಮುದ್ರಿಕಾ ಶಾಸ್ತ್ರ ಮತ್ತಿತರ ಲಕ್ಷಣಗಳು" ಎಂಬ ಪುಸ್ತಕವು ಹೆಚ್ಚಿನ ಮಾಹಿತಿಯನ್ನು ಕೊಡುತ್ತಿದೆ.)



Edited, Printed & Published by K. V. Shenoy
at The Prabhat Printers, Ltd., Mangalore.